# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1725 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 14.03.2022. |
| ಉತ್ತರಿಸುವ ಸಚಿವರು | : | ಉನ್ನತ ಶಿಕ್ಷಣ, ಐಟಿ–ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ ಸಚಿವರು. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರಿ/ಅನುದಾನಿತ ಪಾಲಿಟೆಕ್ನಿಕ್ ಮತ್ತು ಇಂಜಿನಿಯರಿಂಗ್ ಕಾಲೇಜಿನ ಬೋಧಕ/ಬೋಧಕೇತರರಿಗೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ದೀರ್ಘಕಾಲದಿಂದ ತಿದ್ದುಪಡಿ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಚಾಲ್ತಿಯಲ್ಲಿದ್ದ 2006 ಮತ್ತು 2008ರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ/ಸೇರ್ಪಡೆ ಮಾಡುವ ಸಂಬಂಧ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದ ಪತ್ರ ಸಂಖ್ಯೆ:ಡಿಟಿಇ/47/ಇಎಸ್‌ಟಿ(1)ಎ/2007, ದಿನಾಂಕ:15.03.2010ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಈ ಸಂಬಂಧ ಸರ್ಕಾರದ ಪತ್ರ ಸಂಖ್ಯೆ: ಇಡಿ/170/ಡಿಟಿಇ/2009, ದಿನಾಂಕ:11.06.2010 ರಲ್ಲಿ ಎಐಸಿಟಿಇಯ ಪರಿಷ್ಕೃತ ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ತಾಂತ್ರಿಕ ಶಿಕ್ಷಣ ಇಲಾಖೆಗೆ ತಿಳಿಸಲಾಗಿರುತ್ತದೆ.<br><br>2012 ಮತ್ತು 2016ರಲ್ಲಿ ಎಐಸಿಟಿಇಯು ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸಿದ್ದು, ಸದರಿ ಪರಿಷ್ಕೃತ ಮಾರ್ಗಸೂಚಿಗಳನ್ನು ಅಳವಡಿಸಿಕೊಳ್ಳಲು ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿನ ಹಿರಿಯ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿ, ಇಲಾಖೆಯ ವೃಂದ ಮತ್ತು ನೇಮಕಾತಿಗೆ ತಿದ್ದುಪಡಿ ತರುವ ಸಂಬಂಧ ನಿರ್ದೇಶನಾಲಯದ ಪತ್ರ ಸಂಖ್ಯೆ: ಡಿಟಿಇ 59 ಇಎಸ್‌ಟಿ(1)ಎ 2012 ದಿನಾಂಕ: 24.06.2017ರಲ್ಲಿ ಸಮಗ್ರವಾಗಿ ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. |
| (ಆ) | ಯಾವ ಕಾಲಮಿತಿಯಲ್ಲಿ ತಿದ್ದುಪಡಿ ಮಾಡಲಾಗುವುದು; | |

| | | |
|---|---|---|
| | | ಸದರಿ ಪ್ರಸ್ತಾವನೆಯ ಕುರಿತಂತೆ ಸರ್ಕಾರದ ಪತ್ರ ಸಂಖ್ಯೆ:ಇಡಿ 91 ಡಿಟಿಇ 2017 ದಿನಾಂಕ: 23.01.2018 ರಲ್ಲಿ ಆರ್ಥಿಕ ಇಲಾಖೆ, ಶಾಸನ ರಚನೆ ಮತ್ತು ಸಂಸದೀಯ ವ್ಯವಹಾರ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗಳು ಕೆಲವೊಂದು ಅವಲೋಕನೆಗಳನ್ನು ಮಾಡಿದ್ದು, ಸದರಿ ಅವಲೋಕನೆಗಳನ್ನು ಅಳವಡಿಸಿಕೊಂಡು ಪರಿಷ್ಕರಿಸಿದ ವೃಂದ ಮತ್ತು ನೇಮಕಾತಿ ನಿಯಮಾವಳಿಗಳನ್ನು ಸಲ್ಲಿಸುವಂತೆ ತಾಂತ್ರಿಕ ಶಿಕ್ಷಣ ಇಲಾಖೆಗೆ ತಿಳಿಸಲಾಗಿದ್ದು, ಅದರಂತೆ ನಿರ್ದೇಶನಾಲಯದ ಪತ್ರ ಸಂಖ್ಯೆ: ಡಿಟಿಇ 59 ಇಎಸ್‌ಟಿ(1)ಎ 2013, ದಿನಾಂಕ:20.03.2018ರಲ್ಲಿ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಾವಳಿಗಳ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಸಂಸದೀಯ ವ್ಯವಹಾರ ಇಲಾಖೆಗಳ ಅಭಿಪ್ರಾಯ ಪಡೆಯಲಾಗಿ ಸದರಿ ಇಲಾಖೆಗಳು ನೀಡಿರುವ ಅಭಿಪ್ರಾಯಗಳನ್ನು ಕರಡು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಂಡು ಮರುಪ್ರಸ್ತಾವನೆಯನ್ನು ಸಲ್ಲಿಸುವಂತೆ ಮತ್ತೊಮ್ಮೆ ತಾಂತ್ರಿಕ ಶಿಕ್ಷಣ ಇಲಾಖೆಗೆ ದಿನಾಂಕ:04.07.2018ರ ಪತ್ರದಲ್ಲಿ ತಿಳಿಸಲಾಗಿದೆ. ಅದರಂತೆ, ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆರವರು ಪರಿಷ್ಕೃತ ಪ್ರಸ್ತಾವನೆಯನ್ನು ದಿನಾಂಕ:05.09.2018 & 22.02.2019 ರಂದು ಸರ್ಕಾರಕ್ಕೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಸಂಸದೀಯ ವ್ಯವಹಾರ ಇಲಾಖೆಗಳ ಅಭಿಪ್ರಾಯ ಪಡೆಯಲಾಗಿ, ಸದರಿ ಇಲಾಖೆಗಳು ನೀಡಿರುವ ಅಭಿಪ್ರಾಯಗಳನ್ನು ಕರಡು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಂಡು ಮರುಪ್ರಸ್ತಾವನೆಯನ್ನು ಸಲ್ಲಿಸುವಂತೆ ಮತ್ತೊಮ್ಮೆ ತಾಂತ್ರಿಕ ಶಿಕ್ಷಣ ಇಲಾಖೆಗೆ ದಿನಾಂಕ:13.05.2019 ರಲ್ಲಿ ತಿಳಿಸಲಾಗಿರುತ್ತದೆ. |
| | | ವಿತನ್ಮಧ್ಯೆ, ಮಾರ್ಚ್-2019ರಲ್ಲಿ 7ನೇ ಎಐಸಿಟಿಇ ವೇತನ |
| | | ಶ್ರೇಣಿ ಮತ್ತು ಪರಿಷ್ಕೃತ ಎಐಸಿಟಿಇ ಮಾರ್ಗಸೂಚಿಗಳು ಜಾರಿಗೆ ಬಂದಿದ್ದು, ಸದರಿ ಪರಿಷ್ಕೃತ ಮಾರ್ಗಸೂಚಿಗಳನ್ನು ಹಾಗೂ ಸರ್ಕಾರದ ಆದೇಶ ಸಂಖ್ಯೆ:ಇಡಿ 35 ಡಿಟಿಇ 2018 ದಿನಾಂಕ: |

| | | |
|---|---|---|
| | | 02.11.2019ರನ್ವಯ ಇಲಾಖೆಯಲ್ಲಿನ ಕೆಲವೊಂದು ಹುದ್ದೆಗಳನ್ನು ರದ್ದುಗೊಳಿಸಿ, ರದ್ದುಗೊಳಿಸಿದ ಹುದ್ದೆಗಳ ಬದಲಿಗೆ ಮರುಪದನಾಮೀಕರಣದೊಂದಿಗೆ ಮರು ಸೃಜನೆ ಮಾಡಿರುವ ಹುದ್ದೆಗಳನ್ನು ಮತ್ತು ಜನವರಿ–2020ರಲ್ಲಿ ಎಐಸಿಟಿಇಯು ಹೊರಡಿಸಿರುವ ಪರಿಷ್ಕೃತ ನಿಯಮಗಳನ್ನು ಹಾಗೂ ರಾಜ್ಯ ಸರ್ಕಾರದ ನಿಯಮ/ಆದೇಶ/ ಮಾರ್ಗಸೂಚಿಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಂಡು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸಮಗ್ರವಾಗಿ ಪರಿಷ್ಕರಿಸುವ ಸಲುವಾಗಿ ನೂತನ ಕರಡು ವೃಂದ ಮತ್ತು ನೇಮಕಾತಿ ನಿಯಮಗಳ ಕರಡು ಅಧಿಸೂಚನೆಯನ್ನೊಳಗೊಂಡ ಪ್ರಸ್ತಾವನೆಯನ್ನು ಆಯುಕ್ತಾಲಯದಿಂದ ದಿನಾಂಕ:18.02.2022ರಂದು ಸ್ವೀಕರಿಸಲಾಗಿದ್ದು, ನಿಯಮಾನುಸಾರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅಂತಿಮಗೊಳಿಸಿ ಕಾರ್ಯಗತಗೊಳಿಸಲು ಕ್ರಮವಹಿಸಲಾಗುವುದು. |
| (ಇ) | ಬೋಧಕರಿಗೆ ದೀರ್ಘಕಾಲದಿಂದ ಸಿ.ಎ.ಎಸ್ ಅಡಿಯಲ್ಲಿ ಪದೋನ್ನತಿ ನೀಡದಿರಲು ಕಾರಣಗಳೇನು; | ಸರ್ಕಾರಿ/ಅನುದಾನಿತ ಪಾಲಿಟೆಕ್ನಿಕ್/ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗಳಿಗೆ ಕಾಲ ಕಾಲಕ್ಕೆ ಎಐಸಿಟಿಇಯು ಹೊರಡಿಸುವ ನಿಯಮಾವಳಿಗಳನ್ವಯ ಹಾಗೂ ಸದರಿ ನಿಯಮಗಳನ್ನು ರಾಜ್ಯ ಸರ್ಕಾರವು ಅನುಷ್ಠಾನಗೊಳಿಸಿ ಹೊರಡಿಸುವ ಆದೇಶಗಳನ್ವಯ ಕಾಲಕಾಲಕ್ಕೆ ವೃತ್ತಿಪದೋನ್ನತಿ ಸೌಲಭ್ಯಗಳನ್ನು ನೀಡಲಾಗುತ್ತಿರುತ್ತದೆ.<br>ಸರ್ಕಾರಿ/ಅನುದಾನಿತ ಸರ್ಕಾರಿ ಇಂಜಿನಿಯರಿಂಗ್/ ಪಾಲಿಟೆಕ್ನಿಕ್‌ಗಳಿಗೆ ಸಂಬಂಧಿಸಿದಂತೆ ಕ್ರಮವಾಗಿ ಸರ್ಕಾರದ ಆದೇಶ ದಿನಾಂಕ:08.12.2020 ಮತ್ತು ದಿನಾಂಕ: 10.11.2020 ರಲ್ಲಿ ಎಐಸಿಟಿಇ ರೆಗ್ಯೂಲೇಷನ್ 2012ರ API ಆಧಾರಿತ ಕೆರಿಯರ್ ಅಡ್ವಾನ್ಸ್‌ಮೆಂಟ್ ಯೋಜನೆಯನ್ನು ಅನುಷ್ಠಾನಗೊಳಿಸಿ ಆದೇಶಿಸಲಾಗಿದೆ. ಸದರಿ ಆದೇಶದಲ್ಲಿ ವೃತ್ತಿಪದೋನ್ನತಿ ಮಂಜೂರಾತಿ ಕುರಿತಂತೆ ಎಐಸಿಟಿಇ ರೆಗ್ಯೂಲೇಷನ್ 2010 ಮತ್ತು 2012 ರಲ್ಲಿ ವಿಧಿಸಿರುವ ವಿದ್ಯಾರ್ಹತೆ ಸೇವಾ ಷರತ್ತುಗಳು ಹಾಗೂ ಇತರೆ ಎಲ್ಲಾ ಅರ್ಹತಾ ಮಾನದಂಡ/ನಿಬಂಧನೆಗಳನ್ನು ಕಡ್ಡಾಯವಾಗಿ |
| (ಈ) | ಯಾವ ಕಾಲ ಮಿತಿಯಲ್ಲಿ ಪದೋನ್ನತಿ ನೀಡಲಾಗುವುದು; | |

| | | |
|---|---|---|
| | | ಅಳವಡಿಸಿಕೊಳ್ಳಲು ತಿಳಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಎಐಸಿಟಿಇ ನಿಯಮಾವಳಿಗಳಂತೆ ರಚಿಸಲಾದ ತಜ್ಞರ ಸಮಿತಿ ಅಂದರೆ Screening cum Evaluation ಸಮಿತಿಯು ಎಐಸಿಟಿಇ ನಿಯಮಾವಳಿಗಳು/ಮಾನದಂಡಗಳಂತೆ ಪರಿಶೀಲಿಸಿ ಶಿಫಾರಸ್ಸು ಮಾಡಿದ ನಂತರ ಸರ್ಕಾರದ ಪೂರ್ವಾನುಮೋದನೆ ಪಡೆದು ಕೆರಿಯರ್ ಅಡ್ವಾನ್ಸ್‌ಮೆಂಟ್ ಯೋಜನೆಯ ಸೌಲಭ್ಯಗಳನ್ನು ಮಂಜೂರು ಮಾಡತಕ್ಕದ್ದು ಎಂದು ತಿಳಿಸಲಾಗಿರುತ್ತದೆ.<br><br>ಏತನ್ಮಧ್ಯೆ, ಎಂ.ಇ.ಐ.ಪಾಲಿಟೆಕ್ನಿಕ್ (ಅನುದಾನಿತ), ಬೆಂಗಳೂರು ಇಲ್ಲಿನ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಂ.ಗೋಪಾಲ್, ಆ.ಶ್ರೇ. ಉಪನ್ಯಾಸಕರು, ಸಿವಿಲ್ ವಿಭಾಗ ಮತ್ತು ಇತರರು ಸೇರಿದಂತೆ 9 ಅರ್ಜಿದಾರರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ: 8484/2020(S–RES) ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯವು ದಿನಾಂಕ:04.12.2020 ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಪಾಲಿಟೆಕ್ನಿಕ್ ಬೋಧಕ ಸಿಬ್ಬಂದಿಗಳಿಗೆ CAS ಅಡಿಯಲ್ಲಿ ಸೌಲಭ್ಯಗಳನ್ನು ಮಂಜೂರು ಮಾಡಲು ನಿಯಮಗಳನ್ನು ರೂಪಿಸಿರುವ 2012ರ ಎಐಸಿಟಿಇ CAS ರೆಗ್ಯುಲೇಷನ್ ಅನ್ನು ಅನುಷ್ಠಾನಗೊಳಿಸಿದ ಸರ್ಕಾರದ ಆದೇಶ ಸಂಖ್ಯೆ:ಇಡಿ 167 ಡಿಟಿಇ 2017, ದಿನಾಂಕ:10.11.2020ಕ್ಕೆ ತಡೆಯಾಜ್ಞೆ ನೀಡಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರಿ/ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿನ ಬೋಧಕ ಸಿಬ್ಬಂದಿಗಳಿಗೆ CAS ಅಡಿಯಲ್ಲಿ ವೃತ್ತಿ ಪದೋನ್ನತಿ ಸೌಲಭ್ಯವನ್ನು ನೀಡಲು ಸಾಧ್ಯವಾಗಿರುವುದಿಲ್ಲ. ಪ್ರಸ್ತುತ ಮಾನ್ಯ ನ್ಯಾಯಾಲಯದಿಂದ ದಿ:06.12.2021ರಂದು ಅಂತಿಮ ತೀರ್ಪು ಬಂದಿರುತ್ತದೆ. ಮಾನ್ಯ ನ್ಯಾಯಾಲಯದ ತೀರ್ಪನ್ನು ಪರಿಶೀಲಿಸಿ, ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.<br><br>ಮುಂದುವರೆದು, 2012ರಲ್ಲಿನ ರೆಗ್ಯುಲೇಷನ್ ಅಳವಡಿಸಿಕೊಳ್ಳುವ ಸಂಬಂಧ ಕೆಲವು |
| | | ಗೊಂದಲಗಳಿರುವುದರಿಂದ ಈ ಬಗ್ಗೆ ಸ್ಪಷ್ಟೀಕರಣ ಕೋರಿ ತಾಂತ್ರಿಕ ಶಿಕ್ಷಣ ಇಲಾಖೆಯ ವತಿಯಿಂದ ಎಐಸಿಟಿಇ, ನವದೆಹಲಿ ಇವರಿಗೆ ದಿನಾಂಕ:24.02.2022ರಂದು ಪತ್ರ |

| | | |
|---|---|---|
| | | ಬರೆದಿದ್ದು ಅದರಂತೆ, ಎಐಸಿಟಿಇ, ನವದೆಹಲಿ ಇವರಿಂದ ಸ್ಪಷ್ಟೀಕರಣ ಬಂದ ನಂತರ ವೃತ್ತಿ ಪದೋನ್ನತಿ ಸೌಲಭ್ಯವನ್ನು ನೀಡಲು ನಿಯಮಾನುಸಾರ ಕ್ರಮವಹಿಸಲಾಗುವುದು.<br>ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗೆ ಕೆರಿಯರ್ ಅಡ್ವಾನ್ಸ್‌ಮೆಂಟ್ ಯೋಜನೆಯಡಿ ಸ್ಥಾನೀಕರಣ ಮುಂಬಡ್ತಿ ಮಂಜೂರು ಮಾಡಲು ಸರ್ಕಾರದ ಆದೇಶ ಸಂ:ಇಡಿ 186 ಡಿಟಿಇ 2020, ದಿನಾಂಕ: 30.09.2021ರನ್ವಯ ಇಲಾಖಾ ಹಂತದಲ್ಲಿ ಸ್ಥಾನೀಕರಣ ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯ ಮುಂದೆ ಸಂಸ್ಥೆಗಳಿಂದ ಸ್ವೀಕೃತವಾದ ಪ್ರಸ್ತಾವನೆಗಳನ್ನು ಮಂಡಿಸಲಾಗಿದ್ದು, ಸ್ಥಾನೀಕರಣ ಮುಂಬಡ್ತಿ ಪ್ರಕ್ರಿಯೆಯು ಅಂತಿಮ ಹಂತದಲ್ಲಿದ್ದು ಸದರಿ ಪದೋನ್ನತಿ ಕಾರ್ಯವನ್ನು ಪೂರ್ಣಗೊಳಿಸಲು ತ್ವರಿತಗತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು.<br>ಅನುದಾನಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಬೋಧಕ ವೃಂದದವರಿಗೆ ಕೆರಿಯರ್ ಅಡ್ವಾನ್ಸ್‌ಮೆಂಟ್ ಯೋಜನೆಯಡಿ ಮುಂಬಡ್ತಿ ನೀಡಲು Screening Cum Evaluation ಸಮಿತಿಯನ್ನು ರಚಿಸಲು ಆಯುಕ್ತಾಲಯದಿಂದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಪರಿಶೀಲನೆಯಲ್ಲಿರುತ್ತದೆ. |
| ಉ) | ಪಾಲಿಟೆಕ್ನಿಕ್‌ಗಳಲ್ಲಿ ಖಾಲಿ ಇರುವ ಪ್ರಾಂಶುಪಾಲರ ಹುದ್ದೆಗಳನ್ನು ಬಡ್ತಿ ಮೂಲಕ ತುಂಬದೆ ಇರಲು ಕಾರಣಗಳೇನು; | ಪ್ರಸ್ತುತ ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಪ್ರಾಂಶುಪಾಲರು ಗ್ರೇಡ್-1 ಮತ್ತು ಪ್ರಾಂಶುಪಾಲರು ಗ್ರೇಡ್-2 ಹುದ್ದೆಗಳು ಇರುತ್ತವೆ. ಎಐಸಿಟಿಇಯ ಅಧಿಸೂಚನೆ ಸಂಖ್ಯೆ:37-3/Legal/2010, ದಿನಾಂಕ:05.03.2010ರಲ್ಲಿ ಹೊರಡಿಸಲಾಗಿರುವ "Pay Scale, Service conditions and Qualifications for the Teachers and Academic Staff in Technical Institutions (Diploma) Regulation, 2010" ರಂತೆ ಸರ್ಕಾರದ ಆದೇಶ ಸಂಖ್ಯೆ: ಇಡಿ 118 ಡಿಟಿಇ 2010, ದಿನಾಂಕ:31.03.2011ರಲ್ಲಿ, ತಾಂತ್ರಿಕ ಶಿಕ್ಷಣ ಇಲಾಖೆಯ ಸರ್ಕಾರಿ ಹಾಗೂ ಅನುದಾನಿತ ಬೋಧಕ ವರ್ಗದವರಿಗೆ ಎಐಸಿಟಿಇಯ 6ನೇ ವೇತನ ಶ್ರೇಣಿಗಳನ್ನು |
| ಊ) | ಯಾವ ಕಾಲ ಮಿತಿಯಲ್ಲಿ ಪ್ರಾಂಶುಪಾಲರ ಹುದ್ದೆಗಳನ್ನು ಭರ್ತಿ ಮಾಡಲಾಗುವುದು? | |

| | | |
|---|---|---|
| | | ದಿನಾಂಕ:01.04.2011ರಿಂದ ಜಾರಿಗೊಳಿಸಲಾಗಿದ್ದು, ಸದರಿ ಸರ್ಕಾರದ ಆದೇಶದಲ್ಲಿ ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿನ ಪ್ರಾಂಶುಪಾಲರು ಗ್ರೇಡ್-1 ಹಾಗೂ ಪ್ರಾಂಶುಪಾಲರು ಗ್ರೇಡ್-2 ಹುದ್ದೆಗಳನ್ನು ವಿಲೀನಗೊಳಿಸಿ "ಪ್ರಾಂಶುಪಾಲರು" ಎಂದು ಮರುಪದನಾಮಿಕರಿಸಲಾಗಿರುತ್ತದೆ.<br><br>ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಖಾಲಿಯಿರುವ ಪ್ರಾಂಶುಪಾಲರ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಇಲಾಖೆಯಿಂದ ಸಲ್ಲಿಸಲಾಗಿರುವ ಪ್ರಸ್ತಾವನೆ ಕುರಿತಂತೆ ಸರ್ಕಾರದ ಪತ್ರ ಸಂಖ್ಯೆ: ಇಡಿ 59 ಡಿಟಿಇ 2018, ದಿನಾಂಕ:18.09.2018ರಲ್ಲಿ ಪ್ರಾಂಶುಪಾಲರ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧವಾಗಿ ಪಾಲಿಟೆಕ್ನಿಕ್ ಕಾಲೇಜುಗಳ ಬೋಧಕ ವೃಂದಗಳಿಗೆ ಎ.ಐ.ಸಿ.ಟಿ.ಇ ಮಾರ್ಗಸೂಚಿಗಳನ್ವಯ ಕನಿಷ್ಠ ವಿದ್ಯಾರ್ಹತೆ ಹಾಗೂ ನೇಮಕಾತಿ ವಿಧಾನವನ್ನು ಅಳವಡಿಸಿಕೊಂಡು 2006ರ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಲು ಕ್ರಮವಹಿಸುವಂತೆ ತಿಳಿಸಲಾಗಿರುತ್ತದೆ. ಅದರಂತೆ, ತಾಂತ್ರಿಕ ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಕರಡು ಅಧಿಸೂಚನೆಯನ್ನೊಳಗೊಂಡ ಪ್ರಸ್ತಾವನೆಯನ್ನು ಆಯುಕ್ತಾಲಯದಿಂದ ದಿನಾಂಕ:18.02.2022ರಂದು ಸ್ವೀಕರಿಸಲಾಗಿದ್ದು, ನಿಯಮಾನುಸಾರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅಂತಿಮಗೊಳಿಸಿ ಕಾರ್ಯಗತಗೊಳಿಸಲು ಕ್ರಮವಹಿಸಲಾಗುವುದು. |

**ಇಡಿ 27 ಟಿಪಿಇ 2022**

**(ಡಾ॥ ಅಶ್ವತ್ಥನಾರಾಯಣ್.ಸಿ.ಎನ್)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಹಾಗೂ ಜೀವನೋಪಾಯ ಇಲಾಖೆ ಸಚಿವರು